

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 164 |
| ಸದಸ್ಯರ ಹೆಸರು | : | ಡಾ.ತೇಜಸ್ವಿನಿಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 08-12-2020 |
| ಉತ್ತರಿಸುವ ಸಚಿವರು | : | ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಪರಿಣಾಮಕಾರಿಯಾಗಿ ಆಡಳಿತ ನಡೆಸುತ್ತಿರುವ ಸ್ಥಳೀಯ ಸಂಸ್ಥೆ ಯಾವುದು; | ರಾಜ್ಯದ ಎಲ್ಲಾ ಮಹಾನಗರ ಪಾಲಿಕೆಗಳು, ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿಗಳು ಕರ್ನಾಟಕ ಪೌರಸೇವಾ ಅಧಿನಿಯಮ 1964 ರನ್ವಯ ಹಾಗೂ ಕರ್ನಾಟಕ ಮಹಾನಗರ ಪಾಲಿಕೆಗಳ ಅಧಿನಿಯಮ 1976ರಡಿ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುತ್ತಿವೆ. ಇವುಗಳು ಹೆಚ್ಚು ಪರಿಣಾಮಕಾರಿಯಾಗಿ ಕರ್ತವ್ಯ ನಿರ್ವಹಿಸುವ ಸಂಬಂಧ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ರವರು ಮೇಲುಸ್ತುವಾರಿ ನಿರ್ವಹಿಸುತ್ತಾರೆ. ಆದಾಗ್ಯೂ ಸದರಿ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಯಾವುದಾದರೂ ಸಮಸ್ಯೆ/ಲೋಪ-ದೋಷ ಕಂಡುಬಂದಲ್ಲಿ ಸರ್ಕಾರವು ಸೂಕ್ತ ಮಾರ್ಗದರ್ಶನ ನೀಡಿ ಅವುಗಳನ್ನು ಪರಿಹರಿಸುತ್ತದೆ. |
| ಆ | ತಾಲ್ಲೂಕು ಕೇಂದ್ರಗಳಂತಹ ಪುರಸಭಾ ವಲಯದಲ್ಲಿ ಅಗತ್ಯ ಮೂಲಭೂತ ಸೌಕರ್ಯ ಒದಗಿಸಲಾಗಿದೆಯೇ; | ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳಿಗೆ ವಿವಿಧ ಯೋಜನೆಯಡಿ ಮಂಜೂರಾಗುವ ಅನುದಾನಗಳಿಂದ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲಾಗುತ್ತದೆ. ಅದರಂತೆ ತಾಲ್ಲೂಕು ಕೇಂದ್ರಗಳು ಇರುವಂತಹ ನಗರ ಸ್ಥಳೀಯ ಸಂಸ್ಥೆಗಳಿಗೂ ಸಹ ಇತರೆ ನಗರ ಸ್ಥಳೀಯ ಸಂಸ್ಥೆಗಳಂತೆ ವಿವಿಧ ಯೋಜನೆಯಡಿ ಮಂಜೂರಾಗುವ ಅನುದಾನಗಳಿಂದ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲಾಗುತ್ತದೆ. ಈ ಪೈಕಿ ಕೆಲವು ಯೋಜನೆಗಳ ವಿವರ ಕೆಳಕಂಡಂತಿರುತ್ತವೆ.<br><br>1) 14ನೇ ಹಣಕಾಸು ಆಯೋಗದ ಅನುದಾನದಡಿ 2015-16ನೇ ಸಾಲಿನಿಂದ 2019-20ನೇ ಸಾಲಿನವರೆಗೆ ಪುರಸಭೆಗಳಿಗೆ ಒಟ್ಟು ಅನುದಾನ ರೂ. 906.53 ಕೋಟಿಗಳನ್ನು ಹಂಚಿಕೆ ಮಾಡಿ ಬಿಡುಗಡೆಗೊಳಿಸಲಾಗಿದೆ. ಬಿಡುಗಡೆಯಾದ ಅನುದಾನದಲ್ಲಿ ಪುರಸಭೆಗಳು ರೂ. 644.31 ಕೋಟಿಯನ್ನು ಮೂಲಭೂತ ಸೌಕರ್ಯಗಳಿಗೆ ಅಕ್ಟೋಬರ್ 31, 2020ರ ಅಂತ್ಯದ ವರೆಗೆ ವೆಚ್ಚ ಮಾಡಿದೆ.<br><br>2) 15ನೇ ಹಣಕಾಸು ಆಯೋಗದ ಅನುದಾನದಡಿ 2020-21ನೇ ಸಾಲಿಗೆ ರಾಜ್ಯದ ಪುರಸಭೆಗಳಿಗೆ ಒಟ್ಟು ಅನುದಾನ ರೂ. 240.56 ಕೋಟಿಗಳನ್ನು ಹಂಚಿಕೆ ಮಾಡಿ ಮೊದಲನೆಯ ಕಂತಿನ ಅನುದಾನ ರೂ. 120.28 ಕೋಟಿಗಳನ್ನು ಬಿಡುಗಡೆಗೊಳಿಸಲಾಗಿದೆ. |

| | | |
|---|---|---|
| | | ಪುರಸಭೆಗಳು ಅನುದಾನದ ಬಳಕೆಯ ಮಾರ್ಗಸೂಚಿಯನ್ವಯ ಮೂಲಭೂತ ಸೌಕರ್ಯ ಕಾಮಗಾರಿಗಳನ್ನು ಕೈಗೊಂಡು ಅನುಷ್ಠಾನಿಸಲು ಕ್ರಮವಹಿಸುತ್ತಿವೆ.<br><br>3) **ಅಮೃತ್ ಯೋಜನೆ**<br><br>ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ಪಾರಂಪರಿಕ ಪಟ್ಟಣವೆಂದು ವರ್ಗೀಕರಿಸಲಾದ ಬಾದಾಮಿ ಪುರಸಭೆಯು ಆಯ್ಕೆಯಾಗಿದ್ದು, ಬಾದಾಮಿ ಪುರಸಭೆಗೆ ಸದರಿ ಯೋಜನೆಯಡಿ ಒಟ್ಟು ಅನುದಾನ ರೂ. 35.10 ಕೋಟಿಗಳನ್ನು ಒದಗಿಸಲಾಗಿದೆ. ಸದರಿ ಅನುದಾನದಲ್ಲಿ ಮೂಲಭೂತ ಸೌಕರ್ಯಗಳಾದ ನೀರು ಸರಬರಾಜು, ಒಳಚರಂಡಿ, ಹಸಿರು ಜಾಗ ಮತ್ತು ಉದ್ಯಾನವನ ಅಭಿವೃದ್ಧಿ, ಮಳೆ ನೀರು ಚರಂಡಿ ಮತ್ತು ನಗರ ಸಾರಿಗೆ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ.<br><br>**4. ಸ್ವಚ್ಚ ಭಾರತ್ ಮಿಷನ್**<br>ಸ್ವಚ್ಚ ಭಾರತ್ ಮಿಷನ್ ಯೋಜನೆಯಡಿಯಲ್ಲಿ ವೈಯಕ್ತಿಕ ಶೌಚಾಲಯಗಳ ನಿರ್ಮಾಣಕ್ಕೆ ರೂ.64.28 ಲಕ್ಷಗಳು, ಸಮುದಾಯ ಶೌಚಾಲಯಗಳ/ಸಾರ್ವಜನಿಕ ಶೌಚಾಲಯಗಳ ನಿರ್ಮಾಣಕ್ಕೆ ರೂ.5.55 ಲಕ್ಷಗಳು ಹಾಗೂ ಘನತ್ಯಾಜ್ಯ ನಿರ್ವಹಣೆಗೆ ರೂ.139.53 ಲಕ್ಷಗಳು ಬಿಡುಗಡೆಯಾಗಿದ್ದು, ಇದುವರೆಗೂ ವೈಯಕ್ತಿಕ ಶೌಚಾಲಯಗಳ ನಿರ್ಮಾಣಕ್ಕೆ ರೂ.39.29ಲಕ್ಷಗಳು ಮತ್ತು ಸಮುದಾಯ ಶೌಚಾಲಯಗಳ/ಸಾರ್ವಜನಿಕ ಶೌಚಾಲಯಗಳ ನಿರ್ಮಾಣಕ್ಕೆ ರೂ.5.55 ಲಕ್ಷಗಳು ವೆಚ್ಚವಾಗಿರುತ್ತದೆ.<br><br>**5. ನಗರೋತ್ಥಾನ ಯೋಜನೆ:**<br>ಅಗತ್ಯ ಮೂಲಭೂತ ಸೌಕರ್ಯಗಳಾದ ರಸ್ತೆ, ಚರಂಡಿ, ಒಳಚರಂಡಿ, ನೀರು ಸರಬರಾಜು, ಕಛೇರಿ ಕಟ್ಟಡ, ಹಾಗೂ ಶೌಚಾಲಯ ಇತ್ಯಾದಿಗಳನ್ನು ನಿರ್ವಹಿಸಲು ಅಗತ್ಯತೆಗೆ ಅನುಗುಣವಾಗಿ ನಗರೋತ್ಥಾನ (ಮುನಿಸಿಪಾಲಿಟಿ) ಹಂತ-3ರ ಯೋಜನೆಯಡಿ ಅನುದಾನ ಒದಗಿಸಲಾಗಿದೆ. ಸದರಿ ಯೋಜನೆಯಡಿಯಲ್ಲಿ ಪುರಸಭೆಗಳಿಗೆ ಒಟ್ಟು ರೂ.494.16 ಲಕ್ಷಗಳು ಬಿಡುಗಡೆಯಾಗಿರುತ್ತದೆ ಪೂರ್ಣ ವೆಚ್ಚವಾಗಿರುತ್ತದೆ.<br><br>**6. ಎಸ್.ಎಫ್.ಸಿ ಮುಕ್ತನಿಧಿ ಅನುದಾನ:** ಎಸ್.ಎಫ್.ಸಿ ಮುಕ್ತನಿಧಿ ಅನುದಾನದಡಿಯಲ್ಲಿ ಮೂಲಭೂತ ಸೌಕರ್ಯ ಕಲ್ಪಿಸಲು 1) ಕುಡಿಯುವ ನೀರು 2) ತರಕಾರಿ ಮಾರುಕಟ್ಟೆ 3)ಮಾಂಸ, ಕೋಳಿ ಹಾಗೂ ಮೀನು ಮಾರುಕಟ್ಟೆ 4)ಸಣ್ಣ ಪ್ರಮಾಣದ ಮಾರುಕಟ್ಟೆ ನಿರ್ಮಾಣ 5)ಸಾರ್ವಜನಿಕ ಶೌಚಾಲಯಗಳ ನಿರ್ಮಾಣ ಮಾಡುವುದು 6)ಸ್ಮಶಾನ ಅಭಿವೃದ್ಧಿ 7)ಆಂತರಿಕ ರಸ್ತೆಗಳ ಮತ್ತು ಚರಂಡಿಗಳ ನಿರ್ಮಾಣ ಮಾಡಲು ಅವಕಾಶ ಕಲ್ಪಿಸಲಾಗಿದೆ. |

**7.ಎಸ್.ಎಫ್.ಸಿ ಕುಡಿಯುವ ನೀರು ಅನುದಾನ** : ಎಸ್.ಎಫ್.ಸಿ ಕುಡಿಯವ ನೀರು ಯೋಜನೆಯಡಿ 1)ಕೊಳವೆ ಬಾವಿಗಳನ್ನು ಆಳಗೊಳಿಸುವುದು/ ಸ್ವಚ್ಛಗೊಳಿಸುವುದು 2)ಹೈಡ್ರೋಫ್ಯಾಕ್ಚರಿಂಗ್ 3)ನೀರು ಸರಬರಾಜು ಪೈಪುಗಳ ದುರಸ್ಥಿ/ ಬದಲಾವಣೆ 4)ಹೊಸ ಕೊಳವೆ ಬಾವಿಗಳನ್ನು ಕೊರೆಯಲು ಹಾಗೂ ಪಂಪು ಮೋಟಾರ್ ಅಳವಡಿಸುವ ಕಾಮಗಾರಿ, 5) ಕುಡಿಯುವ ನೀರು ಸರಬರಾಜು ಕಾಮಗಾರಿಗಳಿಗೆ ಅವಶ್ಯವಿರುವ ಪಂಪು ಮೋಟಾರ್, ಪೈಪ್ ಲೈನ್ ಮತ್ತು ಇತರೆ ಸಲಕರಣೆಗಳ ಸಂಗ್ರಹಣೆ ಮೊದಲಾದ ಕಾಮಗಾರಿಗಳನ್ನು ತೆಗೆದುಕೊಳ್ಳಲಾಗಿರುತ್ತದೆ.

**8.ಎಸ್.ಎಫ್.ಸಿ ವಿಶೇಷ ಅನುದಾನ:** ಎಸ್.ಎಫ್.ಸಿ ವಿಶೇಷ ಅನುದಾನವನ್ನು ಮಾನ್ಯ ಮುಖ್ಯಮಂತ್ರಿಗಳ ವಿವೇಚನಾನುಸಾರ ವಿವಿಧ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ವಿಶೇಷ ಅನುದಾನ ನಗರ ಸ್ಥಳೀಯ ಸಂಸ್ಥೆಗಳಿಗೆ ಮಂಜೂರು ಮಾಡಿ ಬಿಡುಗಡೆಗೊಳಿಸಲಾಗುತ್ತದೆ.

| ಯೋಜನೆಯ ಹೆಸರು | ವರ್ಷ | ಹಂಚಿಕೆಯಾದ ಅನುದಾನ | ಬಿಡುಗಡೆಯಾದ ಅನುದಾನ | ಖರ್ಚು |
|---|---|---|---|---|
| ಎಸ್.ಎಫ್.ಸಿ. ಮುಕ್ತನಿಧಿ ಅನುದಾನ | 2020–21 | 5168.04 | 2571.71 | 1000.11 |
| ಎಸ್.ಎಫ್.ಸಿ. ಕುಡಿಯುವ ನೀರಿನ ಅನುದಾನ | | 375.00 | 375.00 | 50.92 |

| | | |
|---|---|---|
| ಇ | ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು ಕೇಂದ್ರದಲ್ಲಿ ಸುಸಜ್ಜಿತವಾದ ಬಸ್ಸು ನಿಲ್ದಾಣ ಹಾಗೂ ವಾಣಿಜ್ಯ ಸಂಕೀರ್ಣ ನಿರ್ಮಾಣ ಯೋಜನೆ ಸರ್ಕಾರದ ಮುಂದಿದೆಯೇ; | ದೊಡ್ಡಬಳ್ಳಾಪುರ ನಗರಸಭೆಗೆ ಸಾರಿಗೆ ಇಲಾಖೆಯಿಂದ ಈಗಾಗಲೇ ಸುಸಜ್ಜಿತ ಬಸ್ ನಿಲ್ದಾಣ ಹಾಗೂ ಬಸ್ ನಿಲ್ದಾಣದಲ್ಲಿ 20 ವಾಣಿಜ್ಯ ಮಳಿಗೆಗಳು ನಿರ್ಮಾಣಗೊಂಡಿದ್ದು, ನಗರಸಭೆಗೆ ಹಸ್ತಾಂತರಿಸಲಾಗಿದೆ. |
| ಈ | ಇದ್ದಲ್ಲಿ, ಇದಕ್ಕಾಗಿ ಎಷ್ಟು ಹಣವನ್ನು ಒದಗಿಸಲಾಗಿದೆ? | ಸರ್ಕಾರದ ಆದೇಶ ಸಂಖ್ಯೆ:ನಅಇ 14 ಟಿಎಂಡಿ 2016 ಬೆಂಗಳೂರು ದಿನಾಂಕ: 04-03-2017 ರಲ್ಲಿ ದೊಡ್ಡಬಳ್ಳಾಪುರ ನಗರಸಭೆಯ ಮಾಲೀಕತ್ವಕ್ಕೆ ಸೇರಿದ 37361.75 ಚ.ಅ ಜಾಗವನ್ನು ಸಾರ್ವಜನಿಕ ಬಸ್ ನಿಲ್ದಾಣ ನಿರ್ಮಾಣಕ್ಕಾಗಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮಕ್ಕೆ ನಿರ್ಮಾಣದ ಪೂರ್ಣ ವೆಚ್ಚವನ್ನು ಭರಿಸಲು ಹಾಗೂ ನಿರ್ಮಾಣವಾಗುವ ವಾಣಿಜ್ಯ ಮಳಿಗೆಗಳಲ್ಲಿ 20 ಮಳಿಗೆಗಳನ್ನು ನಗರಸಭೆಗೆ ಹಸ್ತಾಂತರಿಸುವ ಷರತ್ತುಗಳಿಗೆ ಒಳಪಟ್ಟು ಮಂಜೂರಾತಿ ನೀಡಿರುತ್ತದೆ. ದೊಡ್ಡಬಳ್ಳಾಪುರ ನಗರಸಭೆಯಿಂದ ಹಸ್ತಾಂತರಿಸಿದ ಜಮೀನಿನಲ್ಲಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ವತಿಯಿಂದಲೇ ಸಂಪೂರ್ಣ ವೆಚ್ಚವನ್ನು ಭರಿಸಿ, ಸುಸಜ್ಜಿತ ಬಸ್ ನಿಲ್ದಾಣ ಮತ್ತು ವಾಣಿಜ್ಯ ಸಂಕೀರ್ಣ ನಿರ್ಮಾಣ ಮಾಡಲಾಗಿದೆ. ನಗರಸಭೆ ವತಿಯಿಂದ ಯಾವುದೇ ಅನುದಾನ ಒದಗಿಸಿರುವುದಿಲ್ಲ. |

ಸಂಖ್ಯೆ: ನಅಇ 89 ಜಿಇಎಲ್ 2020

**(ಡಾ॥ ನಾರಾಯಣ ಗೌಡ)**

ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು